ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ, ದಿನಾಂಕ: 18ನೇ ಜುಲೈ, 2019

ಹಟ್ಟಿ ಚಿನ್ನದ ಗಣಿ ಕಾರ್ಯ ವೈಖರಿಯ ಸುಧಾರಣೆ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

301 (200) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಹಟ್ಟಿ ಚಿನ್ನದ ಗಣಿಯು ಯಾವ ವರ್ಷದಲ್ಲಿ ಪ್ರಾರಂಭವಾಯಿತು ;

(ಆ) ಈ ಚಿನ್ನದ ಗಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಒಟ್ಟು ಸಂಖ್ಯೆ ಎಷ್ಟು ; (ಖಾಯಂ ಹಾಗೂ ತಾತ್ಕಾಲಿಕ ಕಾರ್ಮಿಕರ ವಿವರ ನೀಡುವುದು)

(ಇ) ಈ ಚಿನ್ನದ ಗಣಿಯ ನಿರ್ವಹಣೆಗಾಗಿ ವರ್ಷಕ್ಕೆ ವ್ಯಯ ಮಾಡಲಾಗುತ್ತಿರುವ ಹಣ ಎಷ್ಟು ;

(ಈ) ಈ ಚಿನ್ನದ ಗಣಿ ಆರಂಭವಾದಾಗಿನಿಂದ ಉತ್ಪಾದಿಸಲಾದ ಚಿನ್ನದ ಪ್ರಮಾಣವೆಷ್ಟು ; (ವರ್ಷವಾರು ವಿವರ ನೀಡುವುದು)

(ಉ) ಈ ಚಿನ್ನದ ಗಣಿಯ ಹಾಲಿ ಉತ್ಪಾದನೆಯನ್ನು ಹೆಚ್ಚಿಸಲು ಸರ್ಕಾರದ ಕೈಗೊಂಡಿರುವ ಕ್ರಮವೇನು ?